ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಕಾಲ್ಪನಿಕ ವೇತನ ಸಮಸ್ಯೆ ಬಗೆಹರಿಸುವ ಬಗ್ಗೆ

ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ):-

1417 (1742) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಅನುದಾನಿತ ಸಂಸ್ಥೆಗಳ ಶಿಕ್ಷಕ ಸಿಬ್ಬಂದಿ ವರ್ಗದವರಿಗೆ ಸೇವೆಗೆ ಸೇರಿದ ದಿನಾಂಕದಿಂದಲೇ ಸೇವಾ ಸೌಲಭ್ಯಗಳನ್ನು ಒದಗಿಸುವ ಕುರಿತು (ಕಾಲ್ಪನಿಕ ವೇತನ ಬಡ್ತಿ) ಸರ್ಕಾರ ತಕ್ಷಣ ಕ್ರಮ ಕೈಗೊಳ್ಳುವುದೇ ;

(ಆ) ಹಿಂದಿನ ಸರ್ಕಾರಗಳು ಈ ಕುರಿತು ಎಷ್ಟು ಸಮಿತಿಗಳನ್ನು ರಚನೆ ಮಾಡಿದ್ದವು; ಯಾವಾಗ ರಚಿಸಲಾಗಿತ್ತು ; ಆ ಸಮಿತಿಗಳ ವಿವರಗಳನ್ನು ಹಾಗೂ ವರದಿಯ ಪ್ರತಿಗಳನ್ನು ವಿವರಗಳೊಂದಿಗೆ ಒದಗಿಸುವುದು ;

(ಇ) ಸಮಿತಿಗಳ ವರದಿ ಹಾಗೂ ಸರ್ಕಾರದ ಇಲಾಖಾ ಅಧಿಕಾರಿಗಳ ಪ್ರಕಾರ ಸಮಸ್ಯೆ ಪರಿಹರಿಸಲು ತಗುಲಬಹುದಾದ ಅಂದಾಜು ವೆಚ್ಚವೆಷ್ಟು; (ಅಂಕಿ ಅಂಶ ಸಹಿತ ತುಲನೆ ಮಾಡಿ ವಿವರವನ್ನು ನೀಡುವುದು)

(ಈ) ಸೇವೆಗೆ ಸೇರಿದ ದಿನಾಂಕವನ್ನು ಪರಿಗಣಿಸಿ ಪಿಂಚಣಿ, ನಿವೃತ್ತಿ ಎಲ್ಲಾ ಉಪಲಬ್ಧಗಳನ್ನು ಒದಗಿಸಿಕೊಡಲು ಸಮಿತಿಗಳ ವರದಿಯನ್ವಯ ಸರ್ಕಾರ ತಕ್ಷಣ ಕ್ರಮ ಕೈಗೊಂಡು ಕಾರ್ಯಾನ್ವಯಗೊಳಿಸಲು ತೆಗೆದುಕೊಂಡ ಕ್ರಮ ಏನು ; ತೆಗೆದುಕೊಳ್ಳದೇ ಇದ್ದಲ್ಲಿ, ಯಾವ ಕಾಲಮಿತಿಯೊಳಗೆ ಈ ಸಮಸ್ಯೆಯನ್ನು ಬಗೆಹರಿಸಲಾಗುವುದು ?